## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 760
ಮಾನ್ಯ ಸದಸ್ಯರ ಹೆಸರು : ಶ್ರೀ. ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರು
ಉತ್ತರಿಸಬೇಕಾದ ದಿನಾಂಕ : 05-03-2021.

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದ ಉತ್ತರ ಕರ್ನಾಟಕದ ಭಾಗದಲ್ಲಿರುವ ದೇವದಾಸಿ ಪದ್ಧತಿಯ ನಿಯಂತ್ರಣಕ್ಕೆ ಹಲವಾರು ಕಾರ್ಯಕ್ರಮಗಳನ್ನು ರೂಪಿಸಲಾಗಿದ್ದರೂ ಸಹ ಈ ಪದ್ಧತಿ ಸಂಪೂರ್ಣವಾಗಿ ನಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ:</td><td>ರಾಜ್ಯದ 14 ಜಿಲ್ಲೆಗಳಲ್ಲಿ ದೇವದಾಸಿ ಪದ್ಧತಿಯ ನಿಯಂತ್ರಣಕ್ಕೆ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ದೇವದಾಸಿ ಪುನರ್ವಸತಿ ಯೋಜನೆಯ ಕಛೇರಿಗಳನ್ನು ತೆರೆಯಲಾಗಿರುತ್ತದೆ. 14 ಜಿಲ್ಲೆಗಳ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರು ದೇವದಾಸಿ ಪದ್ಧತಿ ಸಮರ್ಪಣಾ ನಿಷೇಧ ಅಧಿಕಾರಿಗಳಾಗಿ ಹಾಗೂ ಯೋಜನಾಧಿಕಾರಿಗಳು, ದೇವದಾಸಿ ಪುನರ್ವಸತಿ ಯೋಜನೆ ಇವರುಗಳಿಂದ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲಾಗುತ್ತಿದೆ.</td></tr>
<tr><td>ಆ)</td><td>ರಾಜ್ಯದಲ್ಲಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಎಷ್ಟು ಬಾಲಕಿಯರು/ ಮಹಿಳೆಯರು ದೇವದಾಸಿ ಪದ್ಧತಿಗೆ ಒಳಗಾಗಿದ್ದಾರೆ: (ಜಿಲ್ಲಾವಾರು ಮಾಹಿತಿ ನೀಡುವುದು)</td><td>
<table>
<tr><th>ಕ್ರ.ಸಂ</th><th>ಜಿಲ್ಲೆಯ ಹೆಸರು</th><th>ಪ್ರಕರಣಗಳ ಸಂಖ್ಯೆ</th></tr>
<tr><td>1</td><td>ಕೊಪ್ಪಳ</td><td>02(ಕೊಪ್ಪಳ ಜಿಲ್ಲೆಯಲ್ಲಿ 2 ಪ್ರಕರಣಗಳು ನಡೆದಿದ್ದು, ಸದರಿಯವರನ್ನು ರಕ್ಷಣೆ ಮಾಡಲಾಗಿದೆ. ಪ್ರಕರಣವನ್ನು ನ್ಯಾಯಾಲಯದಲ್ಲಿ ದಾಖಲಿಸಲಾಗಿದೆ.</td></tr>
<tr><td>2</td><td>ಚಿತ್ರದುರ್ಗ</td><td>0</td></tr>
<tr><td>3</td><td>ರಾಯಚೂರು</td><td>0</td></tr>
<tr><td>4</td><td>ಗದಗ</td><td>0</td></tr>
<tr><td>5</td><td>ಧಾರವಾಡ</td><td>0</td></tr>
<tr><td>6</td><td>ಯಾದಗಿರಿ</td><td>0</td></tr>
<tr><td>7</td><td>ಕಲಬುರಗಿ</td><td>0</td></tr>
<tr><td>8</td><td>ಶಿವಮೊಗ್ಗ</td><td>0</td></tr>
<tr><td>9</td><td>ದಾವಣಗೆರೆ</td><td>0</td></tr>
<tr><td>10</td><td>ಬಾಗಲಕೋಟೆ</td><td>0</td></tr>
<tr><td>11</td><td>ಬಳ್ಳಾರಿ</td><td>0</td></tr>
<tr><td>12</td><td>ಹಾವೇರಿ</td><td>0</td></tr>
<tr><td>13</td><td>ವಿಜಯಪುರ</td><td>0</td></tr>
<tr><td>14</td><td>ಬೆಳಗಾವಿ</td><td>0</td></tr>
</table>
</td></tr>
<tr><td>ಇ)</td><td>ದೇವದಾಸಿ ಪದ್ಧತಿಯನ್ನು ತಡೆಗಟ್ಟಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ:</td><td>ದೇವದಾಸಿ ಪದ್ಧತಿಯನ್ನು ನಿರ್ಮೂಲನೆ ಮಾಡಲು ಈ ಕೆಳಕಂಡ ಕಾರ್ಯಕ್ರಮಗಳನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ನಡೆಸಲಾಗುತ್ತಿದೆ.<br><br>• ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ ಕಾಯ್ದೆ) 1982 ಹಾಗೂ ತಿದ್ದುಪಡಿ ಅಧಿನಿಯಮ 2009ರ ಪ್ರಕಾರ ಯಾವುದೇ ಹೆಣ್ಣು ಮಕ್ಕಳಿಗೆ / ಮಹಿಳೆಯರನ್ನು</td></tr>
</table>

7

| | | |
|---|---|---|
| | | ದೇವದಾಸಿಯನ್ನಾಗಿ ಸಮರ್ಪಣಾ ಮಾಡುವುದು ಅಪರಾಧವಾಗಿದೆ. ದೇವದಾಸಿ ಪದ್ಧತಿ ಆಚರಿಸುವ, ಅನುಮತಿ ನೀಡುವ, ಆಚರಣೆಯಲ್ಲಿ ಬಾಗವಹಿಸುವ, ಪ್ರೋತ್ಸಾಹಿಸುವ, ಕುಮ್ಮಕ್ಕು ನೀಡುವವರಿಗೆ 3 ವರ್ಷಗಳ ಜೈಲು ಶಿಕ್ಷೆ ಮತ್ತು ರೂ.2,000/-ಗಳ ದಂಡ. ಸಮರ್ಪಣೆಗೆ ಪ್ರಚೋದಿಸುವ ಪೋಷಕರು / ಪಾಲಕರು ಅಥವಾ ಅವರ ಸಂಬಂಧಿಕರಿಗೆ 5 ವರ್ಷಗಳ ಕಾರಾಗೃಹ ವಾಸ, ಕನಿಷ್ಟ 2 ವರ್ಷಗಳಿಗೆ ಕಡಿಮೆ ಇಲ್ಲದಂತೆ ಹಾಗೂ ಗರಿಷ್ಟ ರೂ.5,000/- ಗಳ ಕನಿಷ್ಟ ರೂ.2,000/-ಗಳಿಗೆ ಕಡಿಮೆ ಇಲ್ಲದಂತೆ ದಂಡ ವಿಧಿಸಲಾಗುವುದು.<br>• ದೇವದಾಸಿ ನಿಷೇಧ ಕಾಯ್ದೆ ಬಗ್ಗೆ ಬೀದಿ ನಾಟಕ, ಜಾತ್ರಾಜಾಗೃತಿ ಶಿಬಿರಗಳು, ಗೋಡೆ ಬರಹ, ಕರಪತ್ರ ಹಂಚುವಿಕೆ ಮತ್ತು ರ್‍ಯಾಲಿಗಳನ್ನು ಹಮ್ಮಿಕೊಳ್ಳುವುದರ ಮೂಲಕ ವ್ಯಾಪಕ ಪ್ರಚಾರ ನೀಡಲಾಗುತ್ತಿದೆ. ಜಿಲ್ಲಾಡಳಿತ ಹಾಗೂ ಪೋಲಿಸ್ ಇಲಾಖೆ ಸಹಕಾರದೊಂದಿಗೆ ಜಾತ್ರೆ ಸಮಯದಲ್ಲಿ ಈ ಆಚರಣೆ ಮಾಡದಂತೆ ಜಾಗೃತಿ ಮೂಡಿಸಲಾಗುತ್ತಿದೆ.<br>• ಮಾಜಿ ದೇವದಾಸಿ ಮಹಿಳೆಯರನ್ನು ಆರ್ಥಿಕವಾಗಿ ಸಬಲೀಕರಣಗೊಳಿಸಲು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೂಲಕ ರೂ.50,000/- (ರೂ.25,000/-ಬಡ್ಡಿ ರಹಿತ ಸಾಲ ಹಾಗೂ ರೂ.25,000/-ಗಳ ಸಹಾಯಧನ)ಗಳ ಅರ್ಥಿಕ ಸಹಾಯವನ್ನು ನೀಡಲಾಗುತ್ತಿದೆ.<br>• 45 ವರ್ಷ ಮೇಲ್ಪಟ್ಟ ಮಾಜಿ ದೇವದಾಸಿಯರಿಗೆ ಮಾಸಿಕ ರೂ.1,500/-ಗಳ ಮಾಸಾಶನವನ್ನು ನೀಡಲಾಗುತ್ತಿದೆ.<br>• ನಿವೇಶನ ಹೊಂದಿರುವ ವಸತಿ ರಹಿತ ಮಾಜಿ ದೇವದಾಸಿ ಮಹಿಳೆಯರಿಗೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮುಖಾಂತರ ವಸತಿ ನಿರ್ಮಾಣಕ್ಕೆ ಕ್ರಮ ವಹಿಸಲಾಗುತ್ತಿದೆ.<br>• ಆರೋಗ್ಯ ತಪಾಸಣಾ ಶಿಬಿರಗಳು ಹಾಗೂ ಕಾನೂನು ಅರಿವು ಶಿಬಿರಗಳನ್ನು ಆಯೋಜಿಸಲಾಗುತ್ತಿದೆ. |
| ಈ) | ದೇವದಾಸಿ ಪದ್ಧತಿ ತಡೆಗಟ್ಟಲು ಸರ್ಕಾರೇತರ ಸಂಸ್ಥೆಗಳು ಶ್ರಮಿಸುತ್ತಿದ್ದು, ಸದರಿ ಪ್ರಯತ್ನಕ್ಕೆ ಸರ್ಕಾರದ ಬೆಂಬಲವೇನು: | ಸರ್ಕಾರೇತರ ಸಂಸ್ಥೆಗಳು ಹಾಗೂ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಪರಸ್ಪರ ಸಹಯೋಗದೊಂದಿಗೆ ಜಿಲ್ಲಾ ಮಟ್ಟದಲ್ಲಿ ಕೈಗೊಳ್ಳುವ ಜಾತ್ರಾಜಾಗೃತಿ, ಬೀದಿ ನಾಟಕ, ಕಾನೂನು ಶಿಬಿರ ಮತ್ತು ಆರೋಗ್ಯ ಶಿಬಿರಗಳನ್ನು ಪರಿಣಾಮಕಾರಿಯಾಗಿ ನಡೆಸಲಾಗುತ್ತಿದೆ. |
| ಉ) | ದೇವದಾಸಿ ಪದ್ಧತಿ ತಡೆಗಟ್ಟಲು ಮತ್ತು ದೇವದಾಸಿಯರ ಪುನರ್ವಸತಿಗಾಗಿ ನೂತನ ಕಾನೂನು ರಚನೆ ಮಾಡುವ ಬಗ್ಗೆ ಸರ್ಕಾರದ ಪ್ರಯತ್ನವೇನು? | ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ 1982 ಅನ್ನು ಜಾರಿಗೆ ತಂದಿರುತ್ತದೆ. 1982ನೇ ಅಧಿನಿಯಮಕ್ಕೆ ತಿದ್ದುಪಡಿಯನ್ನು ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) (ತಿದ್ದುಪಡಿ) ವಿಧೇಯಕ 2009 ಅನ್ನು ಜಾರಿಗೆ ತರಲಾಗಿದೆ. |

**ಸಂಖ್ಯೆ: ಮಮಇ/23/ಮಅನಿ 2021**

**(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)**
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.